# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 257

ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ

(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 17-02-2022
ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರಿ ನೌಕರರು ಕೋವಿಡ್-19 ಪಿಡುಗು ಸಂದರ್ಭದಲ್ಲಿ ರಾಜ್ಯಾದ್ಯಂತ ಜೀವದ ಹಂಗನ್ನು ತೊರೆದು ಸರ್ಕಾರದ ಜೊತೆಯಲ್ಲಿ ಕೆಲಸದಲ್ಲಿ ತೊಡಗಿದ್ದುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| (ಆ) | ಬಂದಿದ್ದಲ್ಲಿ, ನೌಕರರು ಹಲವು ದಿವಸಗಳಿಂದ ಕೇಂದ್ರ ಸರ್ಕಾರದ ಸಮಾನಾಂತರ ವೇತನ ಮತ್ತು ತುಟ್ಟಿಭತ್ಯೆಗಾಗಿ ಹೋರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬೇಡಿಕೆ ಈಡೇರಿಸದಿರುವುದಕ್ಕೆ ಕಾರಣವೇನು; | ರಾಜ್ಯ ಸರ್ಕಾರವು ಸಾಂಪ್ರದಾಯಿಕವಾಗಿ ಕೇಂದ್ರ ವೇತನ ಆಯೋಗಗಳ ಶಿಫಾರಸ್ಸು ಹಾಗೂ ಕೇಂದ್ರ ವೇತನ ಪರಿಷ್ಕರಣೆಯ ಅವಧಿಯನ್ನು ಅನುಸರಿಸದೇ ತನ್ನದೇ ಆದ ವೇತನ ಆಯೋಗ/ವೇತನ ಸಮಿತಿಗಳ ಶಿಫಾರಸ್ಸಿನ ಮೇರೆಗೆ, ರಾಜ್ಯ ಸರ್ಕಾರಿ ನೌಕರರ ವೇತನ ಮತ್ತು ತುಟ್ಟಿ ಭತ್ಯೆಯೂ ಸೇರಿದಂತೆ ಇತರೆ ಭತ್ಯೆಗಳನ್ನು ಕಾಲದಿಂದ ಕಾಲಕ್ಕೆ ಪರಿಷ್ಕರಿಸಿಕೊಂಡು ಬರಲಾಗಿರುತ್ತದೆ. ಇದು ಸರ್ಕಾರದ ನೀತಿಯಾಗಿರುತ್ತದೆ.<br>ಕೇಂದ್ರ ಸರ್ಕಾರದ ನಿಯಮಗಳು ಮತ್ತು ಕೇಂದ್ರ ವೇತನ ಆಯೋಗದ ಶಿಫಾರಸ್ಸುಗಳು ರಾಜ್ಯ ಸರ್ಕಾರದ |

| | | |
|---|---|---|
| | | ನೌಕರರಿಗೆ ಅನ್ವಯಿಸುವುದಿಲ್ಲ. ಆದುದರಿಂದ, ಕೇಂದ್ರ ಸರ್ಕಾರದ ಹುದ್ದೆ ಮತ್ತು ಹುದ್ದೆಗಳಿಗೆ ನಿಗದಿಪಡಿಸಿರುವ ವೇತನ ಶ್ರೇಣಿ ಮತ್ತು ಭತ್ಯೆಗಳನ್ನು ರಾಜ್ಯ ಸರ್ಕಾರದ ಹುದ್ದೆಗಳಿಗೆ ಅನ್ವಯಿಸಿ ಹೋಲಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. |
| (ಇ) | ಈಡೇರಿಸುವುದಾದರೆ, ಯಾವ ಕಾಲಮಿತಿಯೊಳಗೆ ಈಡೇರಿಸಲಾಗುವುದು; ಇಲ್ಲವಾದಲ್ಲಿ, ಕಾರಣ ನೀಡುವುದು; | ಮೇಲಿನ (ಆ) ಉತ್ತರದಿಂದಾಗಿ ಉದ್ಭವಿಸುವುದಿಲ್ಲ |
| (ಈ) | ನೌಕರರು ಹೊಸ ಪಿಂಚಣಿ ಯೋಜನೆ ವಿರೋಧಿಸಿ ಹಳೆ ಪಿಂಚಣಿಯನ್ನು ಮುಂದುವರಿಸಲು ಕೋರಿರುವುದು ಸರ್ಕಾರದ ಗಮನದಲ್ಲಿದೆಯೇ; ಹಾಗಿದ್ದಲ್ಲಿ, ಇದನ್ನು ಜಾರಿಗೊಳಿಸಲಾಗುವುದೆ; ಯಾವ ಕಾಲಮಿತಿಯೊಳಗೆ ಜಾರಿಗೊಳಿಸಲಾಗುವುದು? | ಹೌದು. ಹಳೆಯ ಪಿಂಚಣಿ ಯೋಜನೆಯ ಆರ್ಥಿಕ ಹೊರೆಯನ್ನು ನಿಭಾಯಿಸಲು ಸಾಕಷ್ಟು ನಿಧಿಯ ಆಧಾರ ಇಲ್ಲದಿರುವುದರಿಂದ ಹಾಗೂ ರಿಸರ್ವ್ ಬ್ಯಾಂಕ್ ರವರು ರಚಿಸಿದ ಸಮಿತಿಯ ವರದಿಯ ಶಿಫಾರಸ್ಸಿನ ಆಧಾರದ ಮೇಲೆ ಕೇಂದ್ರ ಸರ್ಕಾರವು ರಾಷ್ಟ್ರೀಯ ಪಿಂಚಣಿ ಯೋಜನೆಯನ್ನು ದಿನಾಂಕ: 01.01.2004 ರಿಂದ ಜಾರಿಗೊಳಿಸಿರುತ್ತದೆ. ಅದರಂತೆಯೇ ಇತರೆ ರಾಜ್ಯಗಳು ಈ ಯೋಜನೆಯನ್ನು ಅಳವಡಿಸಿಕೊಂಡ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯವು ಕೂಡ ಸರ್ಕಾರದ ಆದೇಶ ಸಂಖ್ಯೆ: ಆಇ (ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ: 31.03.2006 ರನ್ವಯ ದಿನಾಂಕ: 01.04.2006ರಂದು ಮತ್ತು ತದನಂತರ ಸರ್ಕಾರಿ ಸೇವೆಗೆ ಸೇರುವ ನೌಕರರಿಗೆ ರಾಷ್ಟ್ರೀಯ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಿರುತ್ತದೆ.<br>ಹಳೆ ಪಿಂಚಣಿ ಯೋಜನೆಯನ್ನು ಜಾರಿಗೆ ತರುವ ಪ್ರಸ್ತಾವನೆಯು ಸರ್ಕಾರದ ಮುಂದಿಲ್ಲ. |

ಸಂ: ಆಇ 4 ಎಸ್‌ಆರ್‌ಪಿ 2022

(ಬಸವರಾಜ ಬೊಮ್ಮಾಯಿ)

ಮುಖ್ಯಮಂತ್ರಿ